## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1279

ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಅರವಿಂದ ಕುಮಾರ್ ಅರಳಿ

ಉತ್ತರಿಸಬೇಕಾದ ದಿನಾಂಕ : 21.12.2018

ಉತ್ತರಿಸುವ ಸಚಿವರು : ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ, ಅಲ್ಪ ಸಂಖ್ಯಾತರ ಕಲ್ಯಾಣ & ವಕ್ಫ್ ಹಾಗೂ ಹಜ್ ಇಲಾಖಾ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ಜಿಲ್ಲೆಯಲ್ಲಿರುವ ನ್ಯಾಯಬೆಲೆ ಅಂಗಡಿಗಳ ಸಂಖ್ಯೆ ಎಷ್ಟು; ಅವುಗಳ ಕೆಲಸದ ಸಮಯ ಎಷ್ಟು; ಇಲ್ಲಿ ನ್ಯಾಯಬೆಲೆ ಅಂಗಡಿಗಳು ಮಧ್ಯಾಹ್ನದ ನಂತರ ತೆರೆಯದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ತೆಗೆದುಕೊಂಡ ಕ್ರಮಗಳೇನು; | ಬೀದರ್ ಜಿಲ್ಲೆಯಲ್ಲಿ ಒಟ್ಟು 723 ನ್ಯಾಯಬೆಲೆ ಅಂಗಡಿಗಳು ಕಾರ್ಯನಿರ್ವಹಿಸುತ್ತಿವೆ.<br><br>ಸರ್ಕಾರದ ಆದೇಶ ಸಂಖ್ಯೆ: ಆನಾಸ/284/ಡಿಆರ್ಎ/2017, ದಿನಾಂಕ: 28.06.2018ರ ಪ್ರಕಾರ ರಾಜ್ಯದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಎಲ್ಲಾ ನ್ಯಾಯಬೆಲೆ ಅಂಗಡಿಗಳು ಪ್ರತಿ ದಿನ ಬೆಳಿಗ್ಗೆ 07:00 ರಿಂದ ಮಧ್ಯಾಹ್ನ 12:00 ಹಾಗೂ ಸಂಜೆ 04:00 ರಿಂದ ರಾತ್ರಿ 8:00 ಗಂಟೆಯವರೆಗೆ ಕಾರ್ಯ ನಿರ್ವಹಿಸಬೇಕಾಗಿರುತ್ತದೆ (ಪ್ರತಿ ಮಂಗಳವಾರ ಹಾಗೂ ರಾಜ್ಯ ಸರ್ಕಾರದ ಇತರೆ ರಜಾ ದಿನಗಳನ್ನು ಹೊರತುಪಡಿಸಿ).<br><br>ಬೀದರ್ ಜಿಲ್ಲೆಯ ಗ್ರಾಮಾಂತರ ಪ್ರದೇಶಗಳಲ್ಲಿ ಕೆಪಿಟಿಸಿಎಲ್ ರವರು ಲೋಡ್ ಶೆಡ್ಡಿಂಗ್ ಮಾಡುತ್ತಿದ್ದು, ಆ ಪ್ರಕಾರ 01 ವಾರದವರೆಗೆ ಬೆಳಿಗ್ಗೆ 06:00 ರಿಂದ ಮಧ್ಯಾಹ್ನ 12:00 ಗಂಟೆಯವರೆಗೆ ಹಾಗೂ ಒಂದು ವಾರ ಮಧ್ಯಾಹ್ನ 12:00 ರಿಂದ ಸಂಜೆ 6:00 ಗಂಟೆಯವರೆಗೂ ಲೋಡ್ ಶೆಡ್ಡಿಂಗ್ ಇರುತ್ತದೆ. ಬಹುಶಃ ಈ ಲೋಡ್ ಶೆಡ್ಡಿಂಗ್ ಅವಧಿಯಲ್ಲಿ ನ್ಯಾಯಬೆಲೆ ಅಂಗಡಿಗಳು ತೆರೆಯದಿರುವ ಸಾಧ್ಯತೆ ಇರುತ್ತದೆ. ಆದರೆ ವಿದ್ಯುತ್ ಕಡಿತದ ಅವಧಿಯಲ್ಲಿ ನ್ಯಾಯಬೆಲೆ ಅಂಗಡಿಗಳವರು ಪಡಿತರ ಚೀಟಿಗಳ ಕುಟುಂಬದವರ ಜೀವಮಾಪಕ (ಬಯೋಮೆಟ್ರಿಕ್) ಸಂಗ್ರಹಿಸಿ ಫಲಾನುಭವಿಗಳಿಗೆ ಪಡಿತರ ವಿತರಣೆಯನ್ನು ನಿಗದಿತ ಸಮಯದಲ್ಲಿ ವಿತರಿಸುತ್ತಿರುತ್ತಾರೆ. ಈ ಕುರಿತು ಯಾವುದೇ ಲಿಖಿತ ದೂರುಗಳು ಸ್ವೀಕೃತವಾಗಿರುವುದಿಲ್ಲ. |

| | | |
|---|---|---|
| ಆ) | ಬೀದರ್ ಜಿಲ್ಲೆಯಲ್ಲಿ ಸರ್ಕಾರದ (ಗೆಜೆಟ್) ಪ್ರಕಾರ ಎಷ್ಟು ಎಕರೆ ಜಮೀನು ವಕ್ಫ್ ಆಸ್ತಿ ಆಗಿದೆ; ಇದರಲ್ಲಿ ಎಷ್ಟು ಎಕರೆ ಜಮೀನು ಅತಿಕ್ರಮಣವಾಗಿದೆ; ಅತಿಕ್ರಮಣದ ಆಸ್ತಿಯ ಬಗ್ಗೆ ಸರ್ಕಾರ ತೆಗೆದುಕೊಂಡ ಕ್ರಮಗಳೇನು: | ಬೀದರ್ ಜಿಲ್ಲೆಯಲ್ಲಿ ಸರ್ಕಾರದ ಗೆಜೆಟ್ ಪ್ರಕಾರ ಒಟ್ಟು 11596 ಎಕರೆ 14 ಗುಂಟೆ ಜಮೀನು ವಕ್ಫ್ ಆಸ್ತಿಯಾಗಿರುತ್ತದೆ. ಇದರಲ್ಲಿ 9960 ಎಕರೆ ವಕ್ಫ್ ಜಮೀನು ಭೂ ನ್ಯಾಯ ಮಂಡಳಿಯಿಂದ ಮಂಜೂರು ಮಾಡಲಾಗಿರುವುದರಿಂದ ಸಾಗುವಳಿದಾರರೆಂದು ಬೇರೆಯವರ ಹೆಸರನಲ್ಲಿ ವರ್ಗಾಯಿಸಲಾಗಿದೆ. 746 ಎಕರೆ 17 ಗುಂಟೆ ವಕ್ಫ್ ಜಮೀನು ಅತಿಕ್ರಮಣವಾಗಿದೆ. ಇದರಲ್ಲಿ 161 ಎಕರೆ 17 ಗುಂಟೆ ಜಮೀನಿಗೆ ಸಂಬಂಧಿಸಿದಂತೆ ಅತಿಕ್ರಮಣ ಮಾಡಿದ ಅತಿಕ್ರಮಣಕಾರರ ವಿರುದ್ಧ ವಿವಿಧ ನ್ಯಾಯಾಲಯಗಳಲ್ಲಿ ಪ್ರಕರಣಗಳು ವಿಚಾರಣಾ ಹಂತದಲ್ಲಿವೆ. |
| ಇ) | ಅತಿಕ್ರಮಣವಾಗದೇ ಉಳಿದ ಆಸ್ತಿ ಸಂರಕ್ಷಣೆಗಾಗಿ ಸುತ್ತುಗೋಡೆ ನಿಮಿಲಾಗಿದೆಯೇ; ನಿರ್ಮಿಸದಿದ್ದಲ್ಲಿ ಯಾವಾಗ ನಿರ್ಮಿಸಲಾಗುವುದು? | ಬೀದರ್ ಜಿಲ್ಲೆಯಲ್ಲಿ ಅತಿಕ್ರಮಣವಾಗದೇ ಉಳಿದ 396 ವಕ್ಫ್ ಆಸ್ತಿಗಳಿದ್ದು, ಇದರಲ್ಲಿ 143 ವಕ್ಫ್ ಆಸ್ತಿಗಳಿಗೆ ಸುತ್ತುಗೋಡೆ/ತಂತಿ ಬೇಲಿ ನಿರ್ಮಿಸಿ ಸಂರಕ್ಷಿಸಲಾಗಿದೆ. ಉಳಿದ ವಕ್ಫ್ ಆಸ್ತಿಗಳ ರಕ್ಷಣೆಗಾಗಿ ವಕ್ಫ್ ಆಸ್ತಿಗಳ ಸುತ್ತಲೂ ತಂತಿಬೇಲಿ/ಸುತ್ತುಗೋಡೆ ನಿರ್ಮಿಸಲು ಕ್ರಮ ಕೈಗೊಳ್ಳಲಾಗುವುದು. |

ಆನಾಸ 95 ಆನಾಸ 2018

(ಬಿ. ಜೆಡ್. ಜಮೀರ್ ಅಹ್ಮದ್ ಖಾನ್)

ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ
ಹಾಗೂ ಕಾನೂನು ಮಾಪನಶಾಸ್ತ್ರ, ಅಲ್ಪ ಸಂಖ್ಯಾತರ ಕಲ್ಯಾಣ ಮತ್ತು
ವಕ್ಫ್ ಹಾಗೂ ಹಜ್ ಇಲಾಖಾ ಸಚಿವರು